KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ನವಂಬರ್ ೨೭, ೨೦೦೮ (ಮಾರ್ಗಶಿರ ೬, ಶಕ ವರ್ಷ ೧೯೩೦) | ಸಂಚಿಕೆ ೪೭ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ವಿಧಾನ ಸಭಾ ಮತ್ತು ವಿಧಾನ ಪರಿಷತ ಭರವಸೆಗಳಿಗೆ ಸಂಬಂಧಿಸಿದಂತೆ ಸೇಡಂ ತಾಲ್ಲೂಕಿನ ಧಾರ್ಮಿಕ ಸಂಸ್ಥೆಗಳಿಗೆ ಮತ್ತು ಬಿಜಾಪುರ ಜಿಲ್ಲೆ ಧಾರ್ಮಿಕ ಸಂಸ್ಥೆಗೆ ಅನುದಾನ ಮಂಜೂರು ಮಾಡುವ ಕುರಿತು.

**ಪ್ರಸ್ತಾವನೆ :**

2008–09ನೇ ಸಾಲಿನ ಮುಜರಾಯಿ ಇಲಾಖಾ ಲೆಕ್ಕ ಶೀರ್ಷಿಕೆ "2250–00–800–1–03–ದೇವಸ್ಥಾನಗಳು ಮತ್ತು ಧಾರ್ಮಿಕ ಸಂಸ್ಥೆಗಳು–200–ನಿರ್ವಹಣೆ (ಯೋಜನೇತರ)"ರಡಿ ಅನುದಾನ ಒದಗಿಸಲಾಗಿದೆ. ಇದರಲ್ಲಿ ಹಿಂದೂ ಧಾರ್ಮಿಕ ಸಂಸ್ಥೆಗಳ ದುರಸ್ಥಿ/ಜೀರ್ಣೋದ್ಧಾರ/ ನವೀಕರಣ ಕಾರ್ಯಗಳಿಗೆ ಧನ ಸಹಾಯ ಬಿಡುಗಡೆ ಮಾಡಲು ಅವಕಾಶವಿರುತ್ತದೆ.

ವಿಧಾನ ಸಭಾ ಭರವಸೆಗೆ ಸಂಬಂಧಿಸಿದಂತೆ ಸೇಡಂ ವಿಧಾನ ಸಭಾ ಕ್ಷೇತ್ರದ ಧಾರ್ಮಿಕ ಸಂಸ್ಥೆಗಳಿಗೆ ಹಾಗೂ ವಿಧಾನ ಪರಿಷತ್ ಭರವಸೆ ಸಂಬಂಧಿಸಿದಂತೆ ಬಿಜಾಪುರ ಜಿಲ್ಲೆಯ ಧಾರ್ಮಿಕ ಸಂಸ್ಥೆಗಳಿಗೆ ಪ್ರಸಕ್ತ ಸಾಲಿನಲ್ಲಿ ಅನುದಾನವನ್ನು ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದಕಾರಣ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 138 ಮುಅಬಿ 2008, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2008.**

2008–09ನೇ ಸಾಲಿನಲ್ಲಿ "2250–00–800–1–03–ದೇವಸ್ಥಾನಗಳು ಮತ್ತು ಧಾರ್ಮಿಕ ಸಂಸ್ಥೆಗಳ–200–ನಿರ್ವಹಣೆ (ಯೋಜನೇತರ)" ಲೆಕ್ಕ ಶೀರ್ಷಿಕೆಯಡಿ ಒದಗಿಸಲಾದ ಅನುದಾನದಲ್ಲಿ ಅನುಬಂಧದಲ್ಲಿನ ಸೇಡಂ ವಿಧಾನ ಸಭಾ ಕ್ಷೇತ್ರದ ಮತ್ತು ಬಿಜಾಪುರ ಜಿಲ್ಲೆಯ ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿ ಕಾಮಗಾರಿಗಾಗಿ ಒಟ್ಟು ರೂ. 4.00 ಲಕ್ಷ (ರೂ. ನಾಲ್ಕು ಲಕ್ಷಗಳು ಮಾತ್ರ)ಗಳನ್ನು ಬಿಡುಗಡೆ ಮಾಡಲು ಹಣವನ್ನು ಧಾರ್ಮಿಕ ದತ್ತಿ ಆಯುಕ್ತರು, ಬೆಂಗಳೂರುವರಿಗೆ ಬಿಡುಗಡೆ ಮಾಡಲಾಗಿದೆ.

ಧಾರ್ಮಿಕ ದತ್ತಿ ಆಯುಕ್ತರವರು ಅನುದಾನ ಬಿಲ್‌ನಲ್ಲಿ ಸಹಿ ಮಾಡುವುದರ ಜೊತೆಗೆ ಮೇಲು ಸಹಿ ಮಾಡಿ ಸದರಿ ಮೊತ್ತವನ್ನು ಖಜಾನೆಯಿಂದ ಪಡೆದು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ವಿತರಿಸಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ,

ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರಿ ಆದೇಶ ಸಂಖ್ಯೆ: ಕಂಇ 138 ಮುಅಬಿ 2008, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2008.**

**ಅನುಬಂಧ**

**ಗುಲ್ಬರ್ಗಾ ಮತ್ತು ಬಿಜಾಪುರ ಜಿಲ್ಲೆ**

| ಕ್ರ. ಸಂ. | ದೇವಸ್ಥಾನದ ಹೆಸರು | ಮಂಜೂರು ಮಾಡಲಾದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಶ್ರೀ ಹನುಮಾನ್ ದೇವಸ್ಥಾನ, ತೇಲ್ಲೂರ, ಸೇಡಂ ವಿಧಾನಸಭಾ ಕ್ಷೇತ್ರ, ಗುಲ್ಬರ್ಗಾ ಜಿಲ್ಲೆ | 0.50 ಲಕ್ಷ |
| 2 | ಶ್ರೀ ಹನುಮಾನ ದೇವಸ್ಥಾನ, ಹೂಡ (ಕೆ) ಸೇಡಂ ವಿಧಾನಸಭಾ ಕ್ಷೇತ್ರ, ಗುಲ್ಬರ್ಗಾ ಜಿಲ್ಲೆ | 0.50 ಲಕ್ಷ |
| 3 | ಶ್ರೀ ಮರಮ್ಮ ಸೇವಾಲಾಲ್ ದೇವಸ್ಥಾನ, ಬಟಗೇರಾ ಗೇಟ, ಸೇಡಂ ವಿಧಾನಸಭಾ ಕ್ಷೇತ್ರ, ಗುಲ್ಬರ್ಗಾ ಜಿಲ್ಲೆ | 0.25 ಲಕ್ಷ |
| 4 | ಶ್ರೀ ಮರೆಗಮ್ಮ ದೇವಸ್ಥಾನ, ಯಡ್ಡಳ್ಳಿ, ಸೇಡಂ ವಿಧಾನಸಭಾ ಕ್ಷೇತ್ರ, ಗುಲ್ಬರ್ಗಾ ಜಿಲ್ಲೆ | 0.25 ಲಕ್ಷ |
| 5 | ಶ್ರೀ ಭೀಮರಾಯ ದೇವಸ್ಥಾನ, ಹರಿಜನವಾಡ, ಕಾನಾಗಡ್ಡಾ, ಸೇಡಂ ವಿಧಾನಸಭಾ ಕ್ಷೇತ್ರ, ಗುಲ್ಬರ್ಗಾ ಜಿಲ್ಲೆ | 0.25 ಲಕ್ಷ |
| 6 | ಶ್ರೀ ಬೇಡರ ಕಣ್ಣಪ್ಪ ದೇವಸ್ಥಾನ, ಶೆಟ್ಟಿಹುಡ, ಸೇಡಂ ವಿಧಾನಸಭಾ ಕ್ಷೇತ್ರ, ಗುಲ್ಬರ್ಗಾ ಜಿಲ್ಲೆ | 0.25 ಲಕ್ಷ |
| 7 | ಶ್ರೀ ಹನುಮಾನ್ ದೇವಸ್ಥಾನ, ಅಲ್ಲೂರ (ಕೆ) ಚಿತ್ತಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ | 1.00 ಲಕ್ಷ |
| 8 | ಶ್ರೀ ಕಾಳಿಕಾದೇವಿ ದೇವಸ್ಥಾನ, ತೊರವಿ ತಾಂಡಾ ನಂ.3, ಬಿಜಾಪುರ ಜಿಲ್ಲೆ | 1.00 ಲಕ್ಷ |

ಪಿ.ಆರ್. 1375

**ಎಲ್.ಎಸ್. ಶ್ರೀಕಂಠಬಾಬು**
ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ)

**ಶಿಕ್ಷಣ ಸಚಿವಾಲಯ**

**ವಿಷಯ :** ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ, ಪ್ರಾಂಶುಪಾಲರಾಗಿ ನೇಮಕಗೊಂಡು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವವರನ್ನು ಸದರಿ ಇಲಾಖೆಯಿಂದ ಹಿಂದಕ್ಕೆ ಪಡೆದು ಮಾತೃ ಇಲಾಖೆಗೆ ಹಿಂದಿರುಗಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಸುತ್ತೋಲೆ ಸಂಖ್ಯೆ: ಇಡಿ 119 ಡಿಜಿಎಂ 2005, ದಿನಾಂಕ 16–8–2005.
2. ಸರ್ಕಾರದ ಆದೇಶ ಸಂಖ್ಯೆ: ಇಡಿ 368 ಡಿಪಿಐ 2005, ದಿನಾಂಕ 25–7–2007.
3. ಸರ್ಕಾರದ ಆದೇಶ ಸಂಖ್ಯೆ: ಇಡಿ 70 ಡಿಜಿಎಂ 2007, ದಿನಾಂಕ 10–9–2007.
4. ಘನತೆವೆತ್ತ ರಾಜ್ಯಪಾಲರ ಸಲಹೆಗಾರರ ಅಧ್ಯಕ್ಷತೆಯಲ್ಲಿ ದಿನಾಂಕ 11–3–2008ರ ಸಭೆಯ ನಡವಳಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 16–8–2005ರ ಸುತ್ತೋಲೆಯಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆ/ಪದವಿ ಪೂರ್ವ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಗಳನ್ನು ಇತರೆ ಇಲಾಖೆಗಳಿಗೆ ನಿಯೋಜಿಸಿರುವುದರಿಂದ ಬೋಧಕ ಸಿಬ್ಬಂದಿಗಳ ಕೊರತೆ ಉಂಟಾಗಿದ್ದು, ಮಕ್ಕಳ ವಿದ್ಯಾಭ್ಯಾಸಕ್ಕೆ ಅಡಚಣೆ ಆಗುತ್ತಿರುವುದರಿಂದ ಸಾರ್ವಜನಿಕ ಶಿಕ್ಷಣ ಇಲಾಖೆಯ ಶಿಕ್ಷಕರು, ಮುಖ್ಯ ಶಿಕ್ಷಕರು ಹಾಗೂ ತತ್ಸಮಾನ ವೃಂದದ ಅಧಿಕಾರಿಗಳನ್ನು, ಪದವಿ ಪೂರ್ವ ಶಿಕ್ಷಣ ಇಲಾಖೆಯ ಪ್ರಾಂಶುಪಾಲರು/ ಉಪನ್ಯಾಸಕರುಗಳನ್ನು ಬೇರೆ ಇಲಾಖೆಗಳಿಗೆ ನಿಯೋಜನೆ ಮಾಡುವುದನ್ನು ನಿಷೇಧಿಸಿದೆ.

2) ಮೇಲೆ (2)ರಲ್ಲಿ ಓದಲಾದ ದಿನಾಂಕ 25–7–2007ರ ಆದೇಶದಲ್ಲಿ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ನೇಮಕಗೊಂಡು ಆನಂತರ ನಿಯೋಜನೆ ಮೇಲೆ ಬೇರೆ ಇಲಾಖೆಗಳಲ್ಲಿ/ಕಛೇರಿಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಒಟ್ಟು 17 ಪ್ರಾಂಶುಪಾಲರು/ಉಪನ್ಯಾಸಕರುಗಳ ಸೇವೆಯನ್ನು ಆಯಾ ಇಲಾಖೆಗಳಿಂದ ಮಾತೃ ಇಲಾಖೆಗೆ ಹಿಂದಿರುಗಿಸಲು ಆದೇಶಿಸಿದೆ.

3) ಮೇಲೆ (3)ರಲ್ಲಿ ಓದಲಾದ ದಿನಾಂಕ 10–9–2007ರ ಆದೇಶದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಪದವಿ ಪೂರ್ವ ಶಿಕ್ಷಣ ಇಲಾಖೆಯ ಬೋಧಕ ಸಿಬ್ಬಂದಿಗಳಾದ ಶಿಕ್ಷಕರು, ಮುಖ್ಯ ಶಿಕ್ಷಕರು ಹಾಗೂ ಉಪನ್ಯಾಸಕರು ಮತ್ತು ಪ್ರಾಂಶುಪಾಲರುಗಳನ್ನು ಬೇರೆ ಇಲಾಖೆಗಳಲ್ಲಿ ಸಮನಾಂತರ ಹುದ್ದೆಗಳಿಗೆ ನಿಯೋಜಿಸುವುದನ್ನು ನಿಷೇದಿಸಿದೆ. ಹಾಗೂ ಈಗಾಗಲೇ ನಿಯೋಜನೆ ಮೇಲೆ ಇರುವವರನ್ನು ತಕ್ಷಣವೇ ಮಾತೃ ಇಲಾಖೆಗಳಿಗೆ ಹಿಂತಿರುಗಿಸಲು ಸಹ ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರುಗಳಿಗೆ ಸೂಚನೆ ನೀಡಿ ಆದೇಶಿಸಲಾಗಿದೆ.

4) ಮೇಲೆ (4)ರಲ್ಲಿ ಓದಲಾದ ಘನತೆವೆತ್ತ ರಾಜ್ಯಪಾಲರ ಸಲಹೆಗಾರರ ಅಧ್ಯಕ್ಷತೆಯಲ್ಲಿ ದಿನಾಂಕ 11–3–2008ರಂದು ನಡೆದ ಸಭೆಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಪದವಿ ಪೂರ್ವ ಶಿಕ್ಷಣ ಇಲಾಖೆಯ, ಪ್ರಾಂಶುಪಾಲರುಗಳನ್ನು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಹಿಂದಕ್ಕೆ ಪಡೆಯಲು ನಿರ್ಣಯ ಕೈಗೊಳ್ಳಲಾಯಿತು. ಪ್ರಸ್ತುತ ಈ ಕೆಳಕಂಡ ಪ್ರಾಂಶುಪಾಲರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುತ್ತಾರೆ.

1) ಶ್ರೀ ಕೆ.ಸಿ. ನಾರಾಯಣಸ್ವಾಮಿ, ಕಾರ್ಯನಿರ್ವಹಣಾ ಅಧಿಕಾರಿ, ಚನ್ನಪಟ್ಟಣ.
2) ಶ್ರೀ ಕೆ.ವಿ. ರೆಡ್ಡಪ್ಪ, ಕಾರ್ಯನಿರ್ವಹಣಾ ಅಧಿಕಾರಿ, ಚಿಂತಾಮಣಿ.
3) ಶ್ರೀ ಕುಬೇರ್. ಆರ್. ಚವಾಣ್, ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಹಾವೇರಿ.

5) ಮೇಲಿನ ಮೂರು ಅಧಿಕಾರಿಗಳಲ್ಲಿ ಶ್ರೀ ಕೆ.ಸಿ. ನಾರಾಯಣಸ್ವಾಮಿ ಮತ್ತು ಶ್ರೀ ಕೆ. ರೆಡ್ಡಪ್ಪ, ಇವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 3845–46/2007ನ್ನು ಸಲ್ಲಿಸಿದ್ದು, ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು ದಿನಾಂಕ 28–9–2007ರ ಆದೇಶದಲ್ಲಿ ಯಥಾಸ್ಥಿತಿಯನ್ನು (status quo)ನ್ನು ಖಾಯ್ದುಕೊಳ್ಳಲು ಆದೇಶಿಸಿದೆ. ಈ ಹಿನ್ನಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 62 ಡಿಜಿಎಂ 2008, ಬೆಂಗಳೂರು, ದಿನಾಂಕ: 26ನೇ ಸೆಪ್ಟೆಂಬರ್ 2008.**

6) ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ, ಪ್ರಾಂಶುಪಾಲರಾಗಿ ನೇಮಕಗೊಂಡು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಕುಬೇರ್ ಆರ್ ಚವ್ಹಾಣ್, ಸಹಾಯಕ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಹಾವೇರಿ, ಇವರನ್ನು ಈಗಾಗಲೇ ಸರ್ಕಾರದ ಆದೇಶ ಸಂಖ್ಯೆ: ಇಡಿ 368 ಡಿಪಿಐ 2005, ದಿನಾಂಕ 25–7–2007ರಲ್ಲಿ ಅವರುಗಳ ಸೇವೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಈ ಕೂಡಲೇ ಜಾರಿಗೆ ಬರುವಂತೆ ಹಿಂದಕ್ಕೆ ಪಡೆಯಲಾಗಿದೆ. ಹಾಗೂ ಸರ್ಕಾರಿ ಪದವಿ ಪೂರ್ವ ಕಾಲೇಜು, ಕರ್ಜಗಿ, ಹಾವೇರಿ, ಇಲ್ಲಿ ಖಾಲಿ ಇರುವ ಪ್ರಾಂಶುಪಾಲರ ಹುದ್ದೆಗೆ ವರ್ಗಾಯಿಸಿ ಆದೇಶಿಸಿದೆ.

7) ಈ ಆದೇಶ ಹೊರಡಿಸಿದ 15 ದಿನಗಳೊಳಗಾಗಿ ಇಲಾಖೆಗೆ ವಾಪಸ್ಸು ಬಂದು ಹಾಜರಾಗಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1361

**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು–1,2)

**ವಸತಿ ಸಚಿವಾಲಯ**

**ವಿಷಯ :** ನರ್ಮ್‌ನ ಬಿಎಸ್‌ಯುಪಿ/ಐಹೆಚ್‌ಎಸ್‌ಡಿಪಿಯ ಅನುಮೋದಿತ ಯೋಜನೆಗಳ 35,000 ಫಲಾನುಭವಿಗಳ ಬಯೋಮೆಟ್ರಿಕ್ ಗುರುತಿನ ಚೀಟಿಯ ಕಾರ್ಯವನ್ನು ನಿರ್ವಹಿಸಲು ಮೆ:ವಿನ್‌ಫೋವೇರ್ ಟೆಕ್ನಾಲಜೀಸ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು–79 ಇವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 11–9–2008ರಂದು ನಡೆದ ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ)ಯ 4ನೇ ಸಭೆಯ ನಡವಳಿ.
2. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ: ಕೆಎಸ್‌ಸಿಬಿ/ ಜೆಎನ್‌ಎನ್‌ಯುಆರ್‌ಎಂ–ಐಹೆಚ್‌ಎಸ್‌ಡಿಪಿ/ ಬಯೋಮೆಟ್ರಿಕ್/ 96/ 2008–09, ದಿನಾಂಕ 24–9–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ನಡವಳಿಯಲ್ಲಿ ಬಿಎಸ್‌ಯುಪಿ/ಐಹೆಚ್‌ಎಸ್‌ಡಿಪಿ ಯೋಜನೆಯ 35,000 ಫಲಾನುಭವಿಗಳ ಬಯೋಮೆಟ್ರಿಕ್ ಗುರುತಿನ ಚೀಟಿಯನ್ನು ನೀಡುವ ಕಾರ್ಯವನ್ನು ಮೆ:ವಿನ್‌ಫೋವೇರ್ ಟೆಕ್ನಾಲಜೀಸ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು–79, ಇವರಿಗೆ ರೂ. 54,92,056 ವೆಚ್ಚದಲ್ಲಿ ಮೌಲ್ಯಮಾಪನ ಸಮಿತಿಯ ಶಿಫಾರಸ್ಸಿನಂತೆ ವಹಿಸುವಂತೆ ನಿರ್ಣಯಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಸರ್ಕಾರಕ್ಕೆ ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ) ಸಭೆಯ ನಿರ್ಣಯದ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿ ಬಿಎಸ್‌ಯುಪಿ/ ಐಹೆಚ್‌ಎಸ್‌ಡಿಪಿ ಯೋಜನೆಯ 35,000 ಫಲಾನುಭವಿಗಳ ಬಯೋಮೆಟ್ರಿಕ್ ಗುರುತಿನ ಚೀಟಿಯನ್ನು ನೀಡುವ ಕಾರ್ಯವನ್ನು ಮೆ: ವಿನ್‌ಫೋವೇರ್ ಟೆಕ್ನಾಲಜೀಸ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು–79 ಇವರಿಗೆ ರೂ. 54,92,056 ವೆಚ್ಚದಲ್ಲಿ ಮೌಲ್ಯಮಾಪನ ಸಮಿತಿಯ ಶಿಫಾರಸ್ಸಿನಂತೆ ವಹಿಸುವುದಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ಕೋರಿರುತ್ತಾರೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 19 ಕೊಮಂಲೆ 2007 (ಭಾ) ಬೆಂಗಳೂರು, ದಿನಾಂಕ: 30ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ದಿನಾಂಕ 11–9–2008ರ ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ) ಸಭೆಯ ನಿರ್ಣಯದಂತೆ ಈ ಕೆಳಗೆ ಕಾಣಿಸಿರುವ ತಾಂತ್ರಿಕ –ಕಂ– ಆರ್ಥಿಕ ಬಿಡ್‌ನಂತೆ ಬಿಎಸ್‌ಯುಪಿ/ಐಹೆಚ್‌ಎಸ್‌ಡಿಪಿ ಯೋಜನೆಯ 35,000 ಫಲಾನುಭವಿಗಳ ಬಯೋಮೆಟ್ರಿಕ್ ಗುರುತಿನ ಚೀಟಿಯನ್ನು ನೀಡುವ ಕಾರ್ಯವನ್ನು ಮೆ: ವಿನ್‌ಫೋವೇರ್ ಟೆಕ್ನಾಲಜೀಸ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು–79 ಇವರಿಗೆ ರೂ. 54,92,056 ವೆಚ್ಚದಲ್ಲಿ ನಿಯಮಾನುಸಾರ ಪರಿಷ್ಕೃತ TOR, ಟೆಂಡರ್ ಷರತ್ತಿನನ್ವಯ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ಕೈಗೊಳ್ಳುವ ಕ್ರಮಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ.

| Sl. No. | Pre-qualification Criteria | Technical specifications | M/s Winfoware Technologies Pvt.Ltd. Bangalore-79 |
|---|---|---|---|
| 1 | Smart Card with eneryption as detailed vide paragraph 4 and 5.1 of the Tender document. | 35000 | 51,80,000 |
| 2 | Installation and commission of Reader as per specifications vide 12.1 (without maintenance) | 2 | 52,000 |
| 3 | Cost of maintenance of Reader | 2 | |
| | | 1 year | 11685.44 |
| | | 2 year | 11685.44 |
| | | 3 year | 11685.44 |
| 4 | Displaying beneficiary data base in the server along with MIS reports | | 2,25,000 |
| 5 | Training cost of KSCB staff if any | | 30000 |
| 6 | Any other cost of vendor feels (specify) | | -- |
| | **Total** | | **54,92,056** |

ಸದರಿ ಕಾರ್ಯಕ್ಕೆ ತಗುಲಲಿರುವ ವೆಚ್ಚವನ್ನು ನಗರಾಭಿವೃದ್ಧಿ ಇಲಾಖೆ/ವಸತಿ ಇಲಾಖೆ ಕ್ರಮವಾಗಿ ಬಿಎಸ್‌ಯುಪಿ/ ಐಹೆಚ್‌ಎಸ್‌ಡಿಪಿ ಯೋಜನೆಯಡಿ ಆಯವ್ಯಯದಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಆಯಾ ಇಲಾಖೆಯ ಮುಖಾಂತರವೇ ಪಡೆದು ಭರಿಸುವ ಬಗ್ಗೆ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು ಕ್ರಮ ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1365

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4,

ವಸತಿ ಇಲಾಖೆ

## ಆರ್ಥಿಕ ಸಚಿವಾಲಯ

**ವಿಷಯ :** ಶಿಕ್ಷಕರಿಗೆ ವಿಶೇಷ ಭತ್ಯೆ – ಮುಂದುವರೆಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 06, ದಿನಾಂಕ 29–3–2006.
2. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 14 ಎಸ್‌ಆರ್‌ಪಿ 06, ದಿನಾಂಕ 12–5–2006.
3. ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 07, ದಿನಾಂಕ 28–8–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 29–3–2006ರ ಸರ್ಕಾರಿ ಆದೇಶದಲ್ಲಿ 5ನೇ ರಾಜ್ಯ ವೇತನ ಆಯೋಗದ ಮಧ್ಯಂತರ ವರದಿಯಲ್ಲಿ ಮಾಡಿರುವ ಶಿಫಾರಸ್ಸಿನನ್ವಯ ಅನುದಾನಿತ ಮತ್ತು ಸ್ಥಳೀಯ ಸಂಸ್ಥೆಗಳ ಪ್ರಾಥಮಿಕ ಶಾಲಾ ಶಿಕ್ಷಕರು ಸೇರಿದಂತೆ ರಾಜ್ಯ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಮಾಸಿಕ ರೂ. 200/–ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿತ್ತು.

ಮುಂದುವರೆದು, ಮೇಲೆ (2)ರಲ್ಲಿ ಓದಲಾದ ದಿನಾಂಕ 12–5–2006ರ ಸರ್ಕಾರಿ ಆದೇಶದಲ್ಲಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಪ್ರೌಢ ಶಾಲಾ ಶಿಕ್ಷಕರು ಸೇರಿದಂತೆ ರಾಜ್ಯ ಪ್ರೌಢ ಶಾಲಾ ಶಿಕ್ಷಕರಿಗೆ ಮತ್ತು ಅನುದಾನಿತ ಹಾಗೂ ಸ್ಥಳೀಯ ಸಂಸ್ಥೆಗಳ ಉಪನ್ಯಾಸಕರು ಸೇರಿದಂತೆ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರುಗಳಿಗೆ ಮಾಸಿಕ ರೂ. 200/–ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ 28–8–2008ರ ಸರ್ಕಾರಿ ಆದೇಶದಲ್ಲಿ 5ನೇ ರಾಜ್ಯ ವೇತನ ಆಯೋಗದ ಅಂತಿಮ ವರದಿಯಲ್ಲಿನ ಎರಡನೇ ಸಂಪುಟದಲ್ಲಿ ಮಾಡಿರುವ ಶಿಫಾರಸ್ಸಿನಂತೆ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ದಿನಾಂಕ 1–8–2008 ರಿಂದ ಜಾರಿಗೆ ಬರುವಂತೆ ರೂ. 6250–12000ಗಳ ಸಂವಾದಿ ವೇತನ ಶ್ರೇಣಿಗೆ ಬದಲಾಗಿ ರೂ. 6800–13000 ಗಳ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

5ನೇ ರಾಜ್ಯ ವೇತನ ಆಯೋಗವು ಪ್ರಾಥಮಿಕ ಶಾಲಾ ಶಿಕ್ಷಕ ವರ್ಗದವರಿಗೆ ಮಂಜೂರು ಮಾಡಿರುವ ಮಾಸಿಕ ರೂ. 200/– ಗಳ ವಿಶೇಷ ಭತ್ಯೆಯನ್ನು ಮುಂದುರೆಸದಿರಲು ಶಿಫಾರಸ್ಸು ಮಾಡಿರುತ್ತದೆ. ಆದರೆ, ಅದನ್ನು ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ವೇತನವನ್ನು ನಿಗದಿಪಡಿಸಲು ಸೂಚಿಸಿರುವ ಸೂತ್ರದ ಒಂದು ಅಂಶವನ್ನಾಗಿ ಪರಿಗಣಿಸಲು ಶಿಫಾರಸ್ಸು ಮಾಡಿರುತ್ತದೆ.

ಮೇಲಿನ ಶಿಫಾರಸ್ಸುಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಶಿಕ್ಷಕರಿಗೆ ಮಾಸಿಕ ರೂ. 200/–ಗಳ ವಿಶೇಷ ಭತ್ಯೆಯನ್ನು ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ವೇತನವನ್ನು ನಿಗದಿಪಡಿಲು ಸೂಚಿಸಿರುವ ಸೂತ್ರದ ಒಂದು ಅಂಶವನ್ನಾಗಿ ಪರಿಗಣಿಸುವ ಬದಲಾಗಿ ಅದನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 2007, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2008.**

ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಮಂಜೂರು ಮಾಡಿರುವ ಮಾಸಿಕ ರೂ. 200/–ಗಳ ವಿಶೇಷ ಭತ್ಯೆಯನ್ನು 2007ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ವೇತನವನ್ನು ನಿಗದಿಪಡಿಸಲು ಸೂಚಿಸಿರುವ ಸೂತ್ರದ ಒಂದು ಅಂಶವಾಗಿ ಪರಿಗಣಿಸಲು 5ನೇ ರಾಜ್ಯ ವೇತನ ಆಯೋಗವು ಮಾಡಿರುವ ಶಿಫಾರಸ್ಸನ್ನು ಸರ್ಕಾರವು ಒಪ್ಪಿಕೊಂಡಿರುವುದಿಲ್ಲ. ಮುಂದುವರೆದು, ಸರ್ಕಾರವು ಕೆಳಕಂಡಂತೆ ಆದೇಶಿಸಲು ಹರ್ಷಿಸುತ್ತದೆ.

i) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 31 ಎಸ್‌ಆರ್‌ಪಿ 2007, ದಿನಾಂಕ 28–8–2008ರಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಹೆಚ್ಚಿನ ವೇತನ ಶ್ರೇಣಿ ರೂ. 6800–13000ನ್ನು ನೀಡಿರುವುದರಿಂದಾಗಿ ಅವರುಗಳು ರೂ. 6250/–ಗಳ ಬದಲಾಗಿ ರೂ. 6800/–ಗಳ ಪ್ರಾರಂಭಿಕ ವೇತನಕ್ಕೆ ಅರ್ಹರಾಗುವುದರಿಂದ, ದಿನಾಂಕ 1–8–2008ರಂದು ಅಥವಾ ನಂತರ ನೇಮಕಾತಿ ಹೊಂದಿದ ಪ್ರಾಥಮಿಕ ಶಾಲಾ ಶಿಕ್ಷಕರು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2006 ದಿನಾಂಕ 29–3–2006ರಲ್ಲಿ ಮಂಜೂರು ಮಾಡಿರುವ ಮಾಸಿಕ ರೂ. 200/– ಗಳ ವಿಶೇಷ ಭತ್ಯೆಯನ್ನು ಪಡೆಯಲು ಅರ್ಹರಿರುವುದಿಲ್ಲ.

ii) ದಿನಾಂಕ 1–8–2008ರ ಪೂರ್ವದಲ್ಲಿ ನೇಮಕಗೊಂಡಿರುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ದಿನಾಂಕ 29–3–2006ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 06ರಲ್ಲಿ ದಿನಾಂಕ 1–4–2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿರುವ ಮಾಸಿಕ ರೂ. 200/–ಗಳ ವಿಶೇಷ ಭತ್ಯೆಯನ್ನು ಮುಂದಿನ ಆದೇಶಗಳವರೆಗೆ ಮುಂದುವರೆಸತಕ್ಕದ್ದು.

iii) ದಿನಾಂಕ 12–5–2006ರ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 14 ಎಸ್‌ಆರ್‌ಪಿ 06 ರಲ್ಲಿ ಮಂಜೂರು ಮಾಡಿರುವ ಮಾಸಿಕ ರೂ. 200/–ಗಳ ವಿಶೇಷ ಭತ್ಯೆಯನ್ನು ಹಾಲಿ ಈ ಸೌಲಭ್ಯವನ್ನು ಪಡೆಯುತ್ತಿರುವ ಶಿಕ್ಷಕರುಗಳಿಗೆ ಮಾತ್ರ ಮುಂದಿನ ಆದೇಶಗಳವರೆಗೆ ಮುಂದುವರೆಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

**FINANCE SECRETARIAT**

**Sub :** Special Allowance to Teachers – continuance of.

**Read :** 1. G.O. No. FD 8 SRP 2006, dated 29-3-2006.
2. G.O. No. FD 14 SRP 2006, dated 12-5-2006.
3. G.O. No. FD 31 SRP 2007, dated 28-8-2008.

**Preamble:**

Based on the recommendations made by the 5th State Pay Commission in its Interim Report, orders were issued in Government Order dated 29-3-2006 read at (1) above, sanctioning special allowance at the rate of Rs. 200/- per month to Primary school teachers including Primary school teachers of aided educational institutions with effect from 1-4-2006.

Further, in Government Order dated 12-5-2006 read at (2) above, sanction was accorded for grant of special allowance at the rate of Rs. 200/- per month to High School teachers including teachers of school under local bodies and aided educational institutions and also to Lecturers of Pre-University colleges including Lecturers of Colleges of local bodies and aided educational institutions.

Based on the recommendations of the 5th State Pay Commission made in its Final Report 2nd volume, Government ordered revision of the pay scale of the posts of Primary School Teachers from the existing Rs. 6250-12000 to Rs. 6800-13000 with effect from 1st August 2008 in Government Order dated 28-8-2008 read at (3) above.

The 5th State Pay commission has also recommended to discontinue the Special Allowance of Rs. 200/- per month sanctioned to Primary School teachers. However, it was recommended that the same may be reckoned as a component for fixation of pay in the revised pay scales 2007 in respect of this category of teachers.

The above recommendations have been carefully examined by the Government and the Government consider it necessary to continue payment of special allowance of Rs. 200/- per month sanctioned to teachers instead of taking it as a component for pay fixation in the revised pay scale 2007. Accordingly, the following orders are issued.

**Government Order No. FD 31 SRP 2007, Bangalore, Dated 29th August 2008**

The recommendation of the 5th State Pay Commission regarding reckoning of the Special Allowance of Rs. 200/- per month sanctioned to Primary School teachers as a component for fixation of pay in the revised scale 2007 is not accepted by the Government. Government are further pleased to order as follows:

i) The Primary School Teachers who are appointed on or after 1-8-2008 are not entitled for special allowance of Rs. 200/- p.m. sanctioned with effect from 1-4-2006 in Government Order No. FD 8 SRP 2006, dated 29-3-2006 as they are eligible for the benefit of higher starting pay of Rs. 6800/- instead of Rs. 6250/ in view of assignment of higher pay scale of Rs. 6800-13000 with effect from 1-8-2008 vide G.O. No. FD 31 SRP 2007 dated 28-8-2008.

ii) In respect of the Primary School teachers who are appointed prior to 1-8-2008, the special allowance of Rs. 200/- per month sanctioned with effect from 1-4-2006 in Government Order No. FD 8 SRP 2006 dated 29-3-2006 shall be continued until further orders.

iii) The special allownce at the rate of Rs. 200/- per month sanctioned in Government Order No. FD 14 SRP 2006 dated 12-5-2006 shall be continued to the teachers who are presently getting this benefit, until further orders.

By order and in the name of the Governor of Karnataka,

PR. 1359

**SUNDARA RAJA GUPTHA**

Deputy Secretary to Government,

Finance Department (Services-2)

**ವಸತಿ ಸಚಿವಾಲಯ**

**ವಿಷಯ :** 2008–09ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರ ಆದೇಶ ಸಂಖ್ಯೆ: ವಇ 22 ಕೊಮಂಲೆ 2008, ಬೆಂಗಳೂರು, ದಿನಾಂಕ 23–6–2008.

2. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊನಿಮ/ಲೆಪಶಾ/ಅನುಧಾನ: 2008–2009, ದಿನಾಂಕ 7–8–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 784.735 ಲಕ್ಷಗಳು ಒಟ್ಟು ರೂ. 847.235 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (2)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2008–2009ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ರವರ ಪತ್ರದಲ್ಲಿ 2008–2009ನೇ ಸಾಲಿನ ಆಯವ್ಯಯದ ಸವಿವರ ವೆಚ್ಚದ ಅಂದಾಜುಗಳ ಪುಸ್ತಕ ಸಂಪುಟ–5ರಲ್ಲಿ ರೂ. 6524.94 ಲಕ್ಷಗಳನ್ನು ಯೋಜನೆಯಡಿಯಲ್ಲಿ ಹಾಗೂ ರೂ. 3620.97 ಲಕ್ಷಗಳನ್ನು ಯೋಜನೇತರಡಿಯಲ್ಲಿ ಒಟ್ಟು ರೂ. 10145.91 ಲಕ್ಷಗಳನ್ನು ಒದಗಿಸಲಾಗಿರುವುದರಿಂದ 2008–2009ನೇ ಸಾಲಿನ ಎರಡನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 128.125 ಲಕ್ಷಗಳು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ ರೂ. 709.76 ಲಕ್ಷಗಳು (ಹುಡ್ಕೋ ಸಂಸ್ಥೆಯ ಬೇಡಿಕೆ ಪತ್ರವನ್ನು ಲಗತ್ತಿಸಿರುತ್ತಾರೆ) ಒಟ್ಟು ಯೋಜನೆಯಡಿ ರೂ. 62.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 775.385 ಲಕ್ಷಗಳು ಒಟ್ಟು ರೂ. 837.885 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ವಿವಿಧ ಲೆಕ್ಕಶೀರ್ಷಿಕೆಗಳಡಿ ಎರಡನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಇ 22 ಕೊಮಂಲೆ 2008, ಬೆಂಗಳೂರು, ದಿನಾಂಕ: 25ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2008–09ನೇ ಸಾಲಿಗೆ ಎರಡನೇ ತ್ರೈಮಾಸಿಕ ಕಂತಾಗಿ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಗಳಾದ ಸಿಬ್ಬಂದಿ ವೆಚ್ಚ ಯೋಜನೆ ಮತ್ತು ಯೋಜನೇತರ ಹಾಗೂ ಹುಡ್ಕೋ ಸಾಲದ ಮೇಲು ಉಸ್ತುವಾರಿ (ಯೋಜನೇತರ)ಗಾಗಿ ರೂ. 837.885 ಲಕ್ಷ (ಎಂಟುನೂರು ಮೂವತ್ತೇಳು ಲಕ್ಷದ ಮತ್ತು ಎಂಭತ್ತೆಂಟು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

| ಕ್ರಮ ಸಂಖ್ಯೆ | ಲೆಕ್ಕ ಶೀರ್ಷಿಕೆ | ಎರಡನೇ ತ್ರೈಮಾಸಿಕ | |
|---|---|---|---|
| | | ಯೋಜನೆ | ಯೋಜನೇತರ |
| 1 | ಸಿಬ್ಬಂದಿ ವೆಚ್ಚ<br>2217–04–191–2–01 | 62.50 | 65.625 |
| 2 | ಹುಡ್ಕೋ ಸಾಲಗಳ ಮೇಲು ಉಸ್ತುವಾರಿ<br>4217–60–800–3–01 | – | 709.76 |
| | **ಒಟ್ಟು** | **62.50** | **775.385** |

ಈ ಹಣಕಾಸಿನ ಬಗ್ಗೆ ಈ ಕೆಳಕಂಡ ನಿಬಂಧನೆಗಳನ್ನು ವಿಧಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತದೆ.

2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಎಫ್‌ಡಿ 643 ವೆಚ್ಚ–9/2008, ದಿನಾಂಕ 25–9–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1366

**ಜಿ.ಆರ್. ನಾಗರಾಜ**
ಪೀಠಾಧಿಕಾರಿ–4,
ವಸತಿ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸಂಜೀವ ಮಡಿವಾಳ, ಕಾರ್ಯನಿರ್ವಾಹಕ ಅಧಿಕಾರಿ (ಅಮಾನತ್ತಿನಲ್ಲಿರುವ) ಇವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಂಇ 25 ಮುಆಬಿ 2008, ದಿನಾಂಕ 22–5–2008.
2. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಸಿಬ್ಬಂದಿ.3.ಸಿಆರ್.3/2008–09, ದಿನಾಂಕ 28–5–2008.
3. ಶ್ರೀ ಸಂಜೀವ ಮಡಿವಾಳ, ಕಾರ್ಯನಿರ್ವಾಹಕ ಅಧಿಕಾರಿ ಇವರ ಮನವಿ ದಿನಾಂಕ 23–7–2008 ಮತ್ತು 30–7–2008.

**ಪ್ರಸ್ತಾವನೆ :**

ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಸ್ಥಾನದ ಆಡಳಿತ ನಿರ್ವಹಣೆಯಲ್ಲಿ/ ದೇವಸ್ಥಾನದ ಹಣವನ್ನು ಖರ್ಚು ಮಾಡುವುದರಲ್ಲಿ ಅನೇಕ ಅವ್ಯವಹಾರಗಳು ನಡೆದಿವೆ ಎಂಬ ಬಗ್ಗೆ ಸಾರ್ವಜನಿಕರಿಂದ, ಗಣ್ಯ ವ್ಯಕ್ತಿಗಳಿಂದ ಬಂದಂತಹ ದೂರುಗಳಲ್ಲಿ ಕೆಲವೊಂದು ದೂರುಗಳು ಮೇಲ್ನೋಟಕ್ಕೆ ಸಾಬೀತಾಗಿರುವ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ಮಾನ್ಯ ಲೋಕಾಯುಕ್ತರಿಂದ ಇಲಾಖಾ ವಿಚಾರಣೆ ಜರುಗಿಸುವುದನ್ನು ಬಾಕಿ ಇರಿಸಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 22–5–2008ರ ಸರ್ಕಾರದ ಆದೇಶದಲ್ಲಿ ಶ್ರೀ ಸಂಜೀವ ಮಡಿವಾಳ, ಕಾರ್ಯನಿರ್ವಾಹಕ ಅಧಿಕಾರಿ, ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಸ್ಥಾನ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲಾಗಿತ್ತು.

ಶ್ರೀ ಸಂಜೀವ ಮಡಿವಾಳರವರು ದಿನಾಂಕ 1–11–2007 ರಿಂದ ಕೊಲ್ಲೂರು ಶ್ರೀ ಮೂಕಾಂಬಿಕಾ ದೇವಸ್ಥಾನದ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅವರ ಮೇಲೆ ಹೊರಿಸಿರುವ ಆರೋಪಗಳು ಅವರು ಅಧಿಕಾರ ವಹಿಸಿಕೊಳ್ಳುವ ಪೂರ್ವದ ಅವಧಿಗೆ ಸಂಬಂಧಿಸಿದ್ದಾಗಿರುವುದರಿಂದ ಸದರಿ ಆರೋಪಗಳಿಗೆ ಶ್ರೀ ಸಂಜೀವ ಮಡಿವಾಳರವರನ್ನು ಹೊಣೆಗಾರರನ್ನಾಗಿ ಮಾಡುವುದು ಸೂಕ್ತವಲ್ಲವೆಂದು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು ಅಭಿಪ್ರಾಯ ನೀಡಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರಗಳಲ್ಲಿ ಶ್ರೀ ಸಂಜೀವ ಮಡಿವಾಳ, ಕಾರ್ಯನಿರ್ವಾಹಕ ಅಧಿಕಾರಿ (ಅಮಾನತ್ತಿನಲ್ಲಿರುವ) ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ ಅಮಾನತ್ತುಗೊಳಿಸಿರುವ ಆದೇಶದಲ್ಲಿ ವಿವರಿಸಲಾದ ಕಾರಣಗಳು ತಮ್ಮ ಅವಧಿಗೆ ಸಂಬಂಧಿಸಿರುವುದಿಲ್ಲವೆಂದು ತಿಳಿಸಿ ಅಮಾನತ್ತನ್ನು ರದ್ದುಗೊಳಿಸುವಂತೆ ಕೋರಿರುತ್ತಾರೆ.

ಶ್ರೀ ಸಂಜೀವ ಮಡಿವಾಳ, ಕಾರ್ಯನಿರ್ವಾಹಕ ಅಧಿಕಾರಿ ಇವರನ್ನು ಅಮಾನತ್ತುಗೊಳಿಸಿ ಈಗಾಗಲೇ 4 ತಿಂಗಳುಗಳು ಕಳೆದಿರುವುದರಿಂದ ಮತ್ತು ಸದರಿಯವರ ಮನವಿಯನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(5)(ಸಿ)ರಂತೆ ಶ್ರೀ ಸಂಜೀವ ಮಡಿವಾಳ, ಕಾರ್ಯನಿರ್ವಾಹಕ ಅಧಿಕಾರಿ ಇವರನ್ನು ಸೇವೆಗೆ ಸ್ಥಾಪಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಮುಆಬಿ 2008, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು, ಶ್ರೀ ಸಂಜೀವ ಮಡಿವಾಳ, ಕಾರ್ಯನಿರ್ವಾಹಕ ಅಧಿಕಾರಿ, (ಗ್ರೂಪ್–ಎ) ಇವರನ್ನು, ಇವರ ಮೇಲಿನ ದೂರುಗಳ ಬಗ್ಗೆ ಮಾನ್ಯ ಲೋಕಾಯುಕ್ತಕ್ಕೆ ವಹಿಸಿರುವ ಪ್ರಕರಣದ ತನಿಖಾ ವರದಿಯನ್ನು ನಿರೀಕ್ಷಿಸಿ, ಇವರ ಅಮಾನತ್ತು ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ

ರದ್ದುಪಡಿಸಿ ಇವರನ್ನು ಸಹಾಯಕ ಆಯುಕ್ತರು, ಧಾರ್ಮಿಕ ದತ್ತಿ ಉಂಬಳಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಈ ಹುದ್ದೆಗೆ ನೇಮಿಸಿ ಸೇವೆಯಿಂದ ಪುನರ್ ಸ್ಥಾಪಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1408

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

**ವಿಷಯ :** 2008–09ನೇ ಸಾಲಿನಲ್ಲಿ ಬರ ಹಾಗೂ ಪ್ರವಾಹದ ವಿಕೋಪಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಜಿಲ್ಲಾಧಿಕಾರಿಗಳಿಂದ ಬಂದಿರುವ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

2008–09ನೇ ಸಾಲಿನಲ್ಲಿ ರಾಜ್ಯದಲ್ಲಿ 84 ತಾಲ್ಲೂಕುಗಳನ್ನು ಬರಪೀಡಿತವೆಂದು ಘೋಷಿಸಿ ಕುಡಿಯುವ ನೀರು ಸರಬರಾಜು, ಜಾನುವಾರು ಸಂರಕ್ಷಣೆ ಹಾಗೂ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಲ್ಲಿ ಉದ್ಯೋಗ ಒದಗಿಸುವಂತೆ ಆದೇಶಿಸಲಾಗಿದೆ. ಹಾಗೆಯೇ ರಾಜ್ಯದ ಕೆಲವೊಂದು ಜಿಲ್ಲೆಗಳಲ್ಲಿ ಪ್ರವಾಹ ಪರಿಸ್ಥಿತಿ ಉಂಟಾಗಿ ಮಾನವಜೀವಹಾನಿ, ಜಾನುವಾರುಹಾನಿ, ಮನೆಹಾನಿ, ಬೆಳೆಹಾನಿ ಹಾಗೂ ಮೂಲಭೂತ ಸೌಕರ್ಯಗಳಿಗೆ ಹಾನಿ ಉಂಟಾಗಿದೆ. ಇಂತಹ ಹಾನಿಗೆ ಪರಿಹಾರ ಕೈಗೊಳ್ಳಲು ಹಣ ಬಿಡುಗಡೆ ಮಾಡುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಜಿಲ್ಲಾಧಿಕಾರಿಗಳ ಕೋರಿಕೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಹಣ ಬಿಡುಗಡೆ ಮಾಡಲು ತೀರ್ಮಾನಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 145 ಟಿಎನ್‌ಆರ್ 2008(P1) ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಬರ ಹಾಗೂ ಪ್ರವಾಹದ ವಿಕೋಪಗಳಿಗೆ ತುರ್ತು ಪರಿಹಾರ ಕೈಗೊಳ್ಳಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಈ ಕೆಳಕಂಡ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 1 | ಬೆಂಗಳೂರು (ನಗರ) | 100.00 |
| 2 | ಬೆಂಗಳೂರು ಗ್ರಾಮಾಂತರ | 50.00 |
| 3 | ಬಾಗಲಕೋಟೆ | 200.00 |
| 4 | ಬೆಳಗಾಂ | 300.00 |
| 5 | ಬಳ್ಳಾರಿ | 200.00 |
| 6 | ಬೀದರ್ | 200.00 |
| 7 | ಬಿಜಾಪುರ | 200.00 |
| 8 | ಚಾಮರಾಜನಗರ | 75.00 |
| 9 | ಚಿಕ್ಕಮಗಳೂರು | 75.00 |
| 10 | ಚಿತ್ರದುರ್ಗ | 100.00 |
| 11 | ದಕ್ಷಿಣ ಕನ್ನಡ | 200.00 |
| 12 | ದಾವಣಗೆರೆ | 200.00 |
| 13 | ಧಾರವಾಡ | 100.00 |
| 14 | ಗದಗ್ | 100.00 |
| 15 | ಗುಲ್ಬರ್ಗಾ | 150.00 |
| 16 | ಹಾಸನ | 175.00 |
| 17 | ಹಾವೇರಿ | 100.00 |
| 18 | ಕೊಡಗು | 150.00 |

| ಕ್ರ. ಸಂ. | ಜಿಲ್ಲೆಯ ಹೆಸರು | ರೂ. ಲಕ್ಷಗಳಲ್ಲಿ |
|---|---|---|
| 19 | ಕೋಲಾರ | 150.00 |
| 20 | ಕೊಪ್ಪಳ | 200.00 |
| 21 | ಮಂಡ್ಯ | 50.00 |
| 22 | ಮೈಸೂರು | 150.00 |
| 23 | ರಾಯಚೂರು | 100.00 |
| 24 | ಶಿವಮೊಗ್ಗ | 200.00 |
| 25 | ತುಮಕೂರು | 150.00 |
| 26 | ಉಡುಪಿ | 50.00 |
| 27 | ಉತ್ತರ ಕನ್ನಡ | 100.00 |
| 28 | ರಾಮನಗರ | 50.00 |
| 29 | ಚಿಕ್ಕಬಳ್ಳಾಪುರ | 150.00 |
| | **ಒಟ್ಟು ರೂ.** | **4025.00** |

ಪ್ರಕೃತಿ ವಿಕೋಪ ಪರಿಹಾರ ನಿಧಿಯನ್ನು ಈ ಕೆಳಕಂಡ ವಿಪತ್ತುಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ.

"The CRF should be used for meeting the expenditure for providing immediate relief to the victims of cyclone, drought, earthquake, fire, flood and hailstorm".

1) ಸಿಆರ್‌ಎಫ್/ಎನ್‌ಸಿಸಿಎಫ್ ಹಣವನ್ನು ಈ ಕೆಳಕಂಡಂತೆ ಆದ್ಯತೆಗಳ ಮೇರೆಗೆ ಉಪಯೋಗಿಸುವುದು.
   a) ಮಾನವ/ಪ್ರಾಣಿ ಜೀವಹಾನಿ
   b) ಮನೆ ಹಾನಿ
   c) ಬೆಳೆಹಾನಿ
   d) ಕುಡಿಯುವ ನೀರು ಸರಬರಾಜು
   e) ಮೇವು ಸರಬರಾಜು
   f) ಹಾನಿಗೊಳಗಾದ ಮೂಲಭೂತ ಸೌಕರ್ಯಗಳ ತುರ್ತು ರಿಪೇರಿ/ಪೂರ್ವ ಸ್ಥಿತಿಗೆ ತರುವುದು.
2) ಕೇಂದ್ರ ಸರ್ಕಾರವು ದಿನಾಂಕ 27–6–2007ರಂದು ಹೊರಡಿಸಿರುವ ಮಾರ್ಗಸೂಚಿಗಳಲ್ಲಿ ಅವಕಾಶವಿಲ್ಲದಂತಹ ಯಾವುದೇ ಕಾಮಗಾರಿಗಳನ್ನು ಕೈಗೊಳ್ಳುವಂತಿಲ್ಲ.
3) ಅನುದಾನ ಲಭ್ಯತೆ ಇಲ್ಲದೆ ಯಾವುದೇ ದುರಸ್ತಿ ಕಾಮಗಾರಿಗಳನ್ನು ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.
4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು
5) ಪ್ರಕೃತಿ ವಿಕೋಪದಿಂದ ಹಾಳಾಗಿರುವ ಮೂಲಭೂತ ಸೌಕರ್ಯಗಳನ್ನು ರಿಪೇರಿ ಮಾಡುವಾಗ ಮಾರ್ಗಸೂಚಿಯ ಐಟಂ ಸಂಖ್ಯೆ (18)ರಲ್ಲಿ ತಿಳಿಸಿರುವಂತಹ ಕಾಮಗಾರಿಗಳನ್ನು ಮಾತ್ರ ತೆಗೆದುಕೊಳ್ಳಲು ಅವಕಾಶ ಇರುತ್ತದೆ. ಮಾರ್ಗಸೂಚಿಯ ಐಟಂ ಸಂಖ್ಯೆ (18)ರಲ್ಲಿ Repairs/Restoration of immediate nature of the damaged infrastructure in eligible sectors ಗೆ ಸಂಬಂಧಿಸಿದಂತೆ works of immediate nature ಯಾವುವು ಎಂಬ ಬಗ್ಗೆ ಮಾರ್ಗಸೂಚಿಗೆ ಲಗತ್ತಿಸಿರುವ ಅಪೆಂಡಿಕ್ಸ್‌ನಲ್ಲಿ ತಿಳಿಸಲಾಗಿದೆ. ಸಿಆರ್‌ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಅಂತಹ ಕಾಮಗಾರಿಗಳನ್ನು ಮಾತ್ರ ತೆಗೆದುಕೊಳ್ಳಬೇಕು. ಹಾಗೂ ಮಾರ್ಗಸೂಚಿಗಳಲ್ಲಿ ನಿಗಧಿಪಡಿಸಿದ ಅವಧಿಯಲ್ಲಿ ಕಾಮಗಾರಿಗಳನ್ನು ಮುಗಿಸಬೇಕು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2245–02–110–0–01–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್.ಡಿ. 1264 ವೆಚ್ಚ.07/08, ದಿನಾಂಕ 22–9–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1409

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ
(ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ 2008–09ನೇ ಸಾಲಿಗೆ ರಾಜ್ಯ ಹೆದ್ದಾರಿಗಳ ಮೂರು ವರ್ಷಗಳ ನಿರ್ವಹಣೆಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ. ಕ.ರ.ಅ.ನಿ.ನಿ/ವ್ಯ.ನಿ/2008–09/0762 ದಿನಾಂಕ.14–07–2008.

2) ಸರ್ಕಾರದ ಪತ್ರ ಸಂಖ್ಯೆ. ಲೋಇ:39:ಐಎಫ್ಎ:2008. ದಿನಾಂಕ.19.08.2008

**ಪ್ರಸ್ತಾವನೆ:**

2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3054–03–337–0–05–200 ರಾಜ್ಯ ಹೆದ್ದಾರಿಗಳ ನಿರ್ವಹಣೆ (ಯೋಜನೇತರ)" ಅಡಿಯಲ್ಲಿ ರೂ. 66.00 ಕೋಟಿಗಳನ್ನು ನಿಗದಿಪಡಿಸಲಾಗಿತ್ತು. ಮೇಲೆ ಓದಲಾದ(2)ರ ಸರ್ಕಾರದ ಪತ್ರದಲ್ಲಿ ಸದರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಒದಗಿಸಲಾಗಿದ್ದ ರೂ.66.00 ಕೋಟಿಗಳ ಅನುದಾನವನ್ನು ರೂ. 50.00 ಕೋಟಿಗಳಿಗೆ ಕಡಿತಗೊಳಿಸಲಾಗಿದೆ.

ಮೇಲೆ ಓದಲಾದ (1)ರ ಪತ್ರದಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ನಿಗಮದ ವತಿಯಿಂದ ಕೈಗೊಳ್ಳಲಾಗಿರುವ 3 ವರ್ಷಗಳ ರಾಜ್ಯ ಹೆದ್ದಾರಿಗಳ ನಿರ್ವಹಣೆ ಕಾಮಗಾರಿಗಳ ಬಿಲ್ಲುಗಳನ್ನು ಪಾವತಿಸಲು ರೂ.25.00 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಇದುವರೆಗೆ ಪ್ರಸುತ್ತ ಸಾಲಿನಲ್ಲಿ ಒಟ್ಟು ರೂ.24.00 ಕೋಟಿಗಳನ್ನು ಸದರಿ ಲೆಕ್ಕಶೀರ್ಷಿಕೆಯಡಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಲೋಇ 19 ಇಎಪಿ 2008 ಬೆಂಗಳೂರು ದಿನಾಂಕ. 26ನೇ ಆಗಸ್ಟ್ 2008**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಳ್ಳಲಾಗುತ್ತಿರುವ ರಾಜ್ಯ ಹೆದ್ದಾರಿಗಳ 2005–08 ಮೂರು ವರ್ಷಗಳ ಅವಧಿಯ ನಿರ್ವಹಣೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ನಿಗದಿಪಡಿಸಲಾಗಿರುವ ರೂ.50.00 ಕೋಟಿಗಳ ಪೈಕಿ ರೂ.9.00 (ಒಂಬತ್ತು ಕೋಟಿ ರೂಪಾಯಿಗಳು ಮಾತ್ರ) ಕೋಟಿಗಳನ್ನು ಎರಡನೇ ತ್ರೈಮಾಸಿಕದ ಬಾಕಿ ಉಳಿದ ಅವಧಿಗೆ ಲೆಕ್ಕ ಶೀರ್ಷಿಕೆ "3054–03–337–0–05–200 ಯೋಜನೇತರ ಅಡಿಯಲ್ಲಿ" ರಾಜ್ಯ ಹೆದ್ದಾರಿಗಳ ನಿರ್ವಹಣೆಗಾಗಿ ಬಿಡುಗಡೆ ಮಾಡಲಾಗಿದೆ.

2. ಮುಂದುವರೆದು, ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲು ರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

3. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಲೋಇ/467/ ಆಕೋ.1/08 ದಿನಾಂಕ 23–08–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ದೇವಿಪ್ರಸಾದ್**

ಸರ್ಕಾರದ ಅಧಿನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**ವಿಷಯ:** 2008–09 ರಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ನಿಗದಿಪಡಿಸಲಾಗಿರುವ ಬಂಡವಾಳ ವೆಚ್ಚದಡಿಯಲ್ಲಿ ಬಾಕಿ ಇರುವ ಅನುದಾನವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ.ಲೋಇ/28/ಇಎಪಿ/2008 ದಿನಾಂಕ 19–04–2008.

2) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ. ಕ.ರ.ಅ.ನಿ.ನಿ./ವ್ಯ.ನಿ/2008–09/0763 ದಿನಾಂಕ 09–07–2008.

**ಪ್ರಸ್ತಾವನೆ:**

ಓದಲಾದ (1) ರಲ್ಲಿನ ಸರ್ಕಾರದ ಆದೇಶದಲ್ಲಿ, 2008–09ನೇ ಸಾಲಿಗೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸರ್ಕಾರದಿಂದ ಬಂಡವಾಳ ವೆಚ್ಚದಡಿಯಲ್ಲಿ ನಿಗದಿಪಡಿಸಲಾಗಿದ್ದ ರೂ.300.00 ಕೋಟಿ ರೂ.ಗಳಲ್ಲಿ ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿ–17ನ್ನು 4 ಪಥದ ರಸ್ತೆಯನ್ನಾಗಿ ಪರಿವರ್ತಿಸುವಲ್ಲಿನ ಬೆಂಗಳೂರು–ಮದ್ದೂರು ಭಾಗದ ಕಾಮಗಾರಿಯನ್ನು ಅನ್ಯೂಟಿ ಆಧಾರದ ಮೇಲೆ ಕೈಗೊಂಡು ಮುಗಿಸಿರುವ ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ.ಲಿ. ಇವರಿಗೆ 4ನೇ ಕಂತಿನ ಸೆಮಿ ಅನ್ಯೂಟಿ ಮೊತ್ತ 29.70 ಕೋಟಿ ರೂ.ಗಳನ್ನು ಲೆಕ್ಕಶೀರ್ಷಿಕೆ "5054–80–190–0–01–132 ಬಂಡವಾಳ ವೆಚ್ಚ (ಯೋಜನೆ)" ಅಡಿಯಲ್ಲಿ ಪಾವತಿಸಲು ಸರ್ಕಾರಿ ಆದೇಶವನ್ನು ಹೊರಡಿಸಲಾಗಿದೆ.

ಓದಲಾದ (2) ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, ಈಗಾಗಲೇ ನಿಗಮದಿಂದ ಕೈಗೊಳ್ಳಲಾಗಿದ್ದು ಪ್ರಗತಿಯಲ್ಲಿರುವ ಕಾಮಗಾರಿಗಳ ಬಿಲ್ಲುಗಳ ಪಾವತಿಗಾಗಿ ಮೇಲಿನ ಲೆಕ್ಕಶೀರ್ಷಿಕೆಯಡಿಯಲ್ಲಿ ಬಾಕಿ ಉಳಿದಿರುವ ರೂ.210.00 ಕೋಟಿಗಳಲ್ಲಿ ರೂ.100.00 ಕೋಟಿಗಳ ಮೊತ್ತವನ್ನು ನಿಗಮಕ್ಕೆ ಬಿಡುಗಡೆ ಮಾಡುವಂತೆ ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ. ಲೋಇ 28 ಇಎಪಿ 2008 ಬೆಂಗಳೂರು, ದಿ: 26ನೇ ಆಗಸ್ಟ್ 2008**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ಕೈಗೊಂಡು ಪ್ರಗತಿಯಲ್ಲಿರುವ ಕಾಮಗಾರಿಗಳ ಬಾಕಿ ಬಿಲ್ಲುಗಳ ಪಾವತಿಗಾಗಿ 72.50 ಕೋಟಿ ರೂ. ಗಳನ್ನು (ಎಪ್ಪತ್ತೆರಡು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕಶೀರ್ಷಿಕೆ "5054–80–190–0–01–132 (ಯೋಜನೆ)" ಅಡಿಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಮುಂದುವರೆದು, ನಿಗಮವು 72.50 ಕೋಟಿ ರೂ.ಗಳ (ಎಪ್ಪತ್ತೆರಡು ಕೋಟಿ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಬಿಲ್ಲನ್ನು ಕೆ.ಎಫ್.ಸಿ.17(ಸಿ)4 ರಲ್ಲಿನಂತೆ ಮಹಾಲೇಖಪಾಲರಿಂದ (ಎ ಅಂಡ್ ಇ) ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು; ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲುರುಜು ಮಾಡಿಸಿ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ.ಲೋಇ/463 ಆಕೋ–1/2008 ದಿನಾಂಕ 23–08–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1228

**ಎಂ. ದೇವಿಪ್ರಸಾದ್**
ಸರ್ಕಾರದ ಅಧಿನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**PUBLIC WORKS, PORTS & IWT SECRETARIAT**

**Sub:** Improvements and Widening of Hubli Lakshmeshwar (Mangsuli - Laxmeshwar SH-73) in Hubli and Kundgol Taluk of Dharwad District).

**Read:** Managing Director, Karnataka Road Development Corporation Ltd, letter No.K.R.D.C.L./CE/2057 dated 4-9-2008 and No.2173 dated 16-09-2008.

**PREAMBLE:**

1. In the above read letters, Karnataka Road Development Corporation Ltd., has requested for Administrative sanction to the work of improvements and widening of Hubli Lakshmeshwar (Mangsuli-Laxmeshwar SH-73) in Hubli and Kundgol Taluk of Dharwad District informing that the Board of Karnataka Road Development Corporation Ltd., has approved to take up the preparation of DPR in its 65th Meeting.

2. The road proposed to be improved is part of Mangsuli-Laxshmeshwar State Highway(SH-73). The project road takes off from National Highway (NH-4) near Hubli traverses through Kundgol-Samshi and ends at Laxshmeshwar. This road is an important connectivity from Laxshmeshwar which is a major agriculture, producing center and Hubli a major commercial hub. The length of road taken up for improvement is 43.00 Km.

3. The existing road is having carriageway width of 3.75 mts to 5.50 mts. As this road passes through black cotton soil area, the road is in very much distressed condition.

4. The work of preparation of Detailed Project Report was entrusted to M/s. Infra Support Engineering Services, Bangalore. The consultants have prepared the Feasibility Report and submitted to KRDCL. As per the Feasibility Report, the present average Traffic on this road is 4984 PCU and the projected traffic at 2030 will be around 16068 PCUs.

5. Now it is proposed to improve this road to 2-lane carriageway of 7.00 mts width with 2.50mts earthen shoulder on both sides, for major portion of the road and 7.00 mts carriageway with paved shoulder of 2.00 mts in urban & village areas. 4-lane road with median is also proposed for Kundgol and Laxshmeshwar towns. The road will be reconstructed with the following pavement configuration;

| | |
|---|---|
| Select Subgrade | 500mm |
| Granular Sub Base as Sub Base | 200mm |
| Wet Mix Macadam | 250mm |
| Dense Bituminous Macadam | 50 mm |
| Semi Dense Bituminous Concrete | 25 mm |

6. Also, it is proposed to reconstruct 2 minor bridges, 15 box culverts and 15 pipe culverts. It is also proposed to construct one ROB between Kundgol and Samshi. The estimated cost of the project as per 2007-08 NHSR of Dharwad circle in Rs.103,04,57,483.00 and cost per km is Rs.2,40,00,407.00.

7. The Feasibility Report was placed before KRDCL Technical Committee meeting held on 10.09.2008. The Committee in principal approved the Feasibility Report.

8. This work is included in the action plan of KRDCL for the year 2008-09.

9. Government have examined the above proposal and hence the following order.

**GOVERNMENT ORDER NO. PWD 52 EAP 2008 BANGALORE, DATED 04th October 2008**

1. Administrative approval is accorded to the estimated amount of Rs.103.50 crore (Rupees One Hundred Three crore and Fifty Lakh only) for the work of improvements and widening of Hubli-Lakshmeshwar (SH-73) in Hubli and Kundagol Taluks of Dharwad district.

2. It is approved to examine taking up the above work on “Annuity” basis through Karnataka Road Development Corporation Ltd.,

This order is issued in concurrence with Finance Department vide Note No.PWD/517/FC-1/2008 dated 22-09-2008.

By order and in the name of the Governor of Karnataka

**M. DEVIPRASAD**

Under Secretary to Government

Public Works, Ports & IWT Department (EAP)

## ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಮಂಗಸೂಳಿ–ಲಕ್ಷ್ಮೇಶ್ವರ ರಾಜ್ಯ ಹೆದ್ದಾರಿ (ಎಸ್.ಹೆಚ್–73) ರ ಧಾರವಾಡ ಜಿಲ್ಲೆಯ ಹುಬ್ಬಳ್ಳಿ ಮತ್ತು ಕುಂದಗೋಳ ತಾಲ್ಲೂಕಿನಲ್ಲಿನ ರಸ್ತೆಯ ಭಾಗದ ಅಭಿವೃದ್ಧಿ ಮತ್ತು ಅಗಲೀಕರಣ.

**ಓದಲಾಗಿದೆ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ. ಕರಅನಿನಿ/ಮುಇ/2008–09/2057 ದಿನಾಂಕ 4–9–2008 ಹಾಗೂ ಸಂಖ್ಯೆ.2173 ದಿನಾಂಕ 16–09–2008.

**ಪ್ರಸ್ತಾವನೆ:**

1. ಮೇಲೆ ಓದಲಾದ ಪತ್ರಗಳಲ್ಲಿ ಮಂಗಸೂಳಿ–ಲಕ್ಷ್ಮೇಶ್ವರ ರಾಜ್ಯ ಹೆದ್ದಾರಿ (ಎಸ್.ಹೆಚ್–73) ರ ಧಾರವಾಡ ಜಿಲ್ಲೆಯ ಹುಬ್ಬಳ್ಳಿ ಮತ್ತು ಕುಂದಗೋಳ ತಾಲ್ಲೂಕಿನಲ್ಲಿನ ರಸ್ತೆಯ ಭಾಗದ ಅಭಿವೃದ್ಧಿ ಮತ್ತು ಆಗಲೀಕರಣ ಕಾಮಗಾರಿಯ ಯೋಜನಾ ವರದಿಯನ್ನು ತಯಾರಿಸಲು ನಿಗಮದ 65 ನೇ ಮಂಡಳಿಯ ಸಭೆಯಲ್ಲಿ ಅನುಮೋದನೆಯಾಗಿದ್ದು, ಸದರಿ ಕಾಮಗಾರಿಯನ್ನು ಕೈಗೊಳ್ಳಲು ಆಡಳಿತಾತ್ಮಕ ಅನುಮೋದನೆಯನ್ನು ಕೋರಲಾಗಿದೆ.

2. ಯೋಜನೆಯಲ್ಲಿ ಅಭಿವೃದ್ಧಿಪಡಿಸಲಿರುವ ರಸ್ತೆಯ ಮಂಗಸೂಳಿ–ಲಕ್ಷ್ಮೇಶ್ವರ ರಾಜ್ಯ ಹೆದ್ದಾರಿ (ಎಸ್.ಹೆಚ್–73) ರ ಭಾಗವಾಗಿದೆ. ಈ ರಸ್ತೆಯ ಹುಬ್ಬಳ್ಳಿಯ ಹತ್ತಿರ ರಾಷ್ಟ್ರೀಯ ಹೆದ್ದಾರಿ–4 ರಿಂದ ಪ್ರಾರಂಭವಾಗಿ ಕುಂದಗೋಳ ಸಂಶಿಯ ಮೂಲಕ ಲಕ್ಷ್ಮೇಶ್ವರ ಮುಕ್ತಾಯಗೊಳ್ಳುತ್ತದೆ ಮತ್ತು ಪ್ರಮುಖ ಮಾರುಕಟ್ಟೆ ಕೇಂದ್ರವಾದ ಹುಬ್ಬಳ್ಳಿ ಪಟ್ಟಣವನ್ನು ಸಂಪರ್ಕಿಸುವ ಮುಖ್ಯ ರಸ್ತೆಯಾಗಿದೆ. ಯೋಜನೆಯ ಅಡಿಯಲ್ಲಿ ಅಭಿವೃದ್ಧಿಗಾಗಿ ತೆಗೆದುಕೊಳ್ಳಲು ಯೋಜಿಸಿರುವ ರಸ್ತೆಯ ಉದ್ದವು 43.00 ಕಿ.ಮೀ.ಗಳು.

3. ಹಾಲಿ ರಸ್ತೆಯ ಅಗಲವು 3.75 ಮೀ ರಿಂದ 5.5 ಮೀಗಳಾಗಿದ್ದು, ಇದು ಎರೆ ಮಣ್ಣಿನ ಪ್ರದೇಶದಲ್ಲಿ ಹಾದು ಹೋಗುತ್ತಿರುವುದರಿಂದ ತುಂಬಾ ದುಸ್ಥಿತಿಯಲ್ಲಿದ್ದು, ವಾಹನ ಸಂಚಾರಕ್ಕೆ ತುಂಬಾ ತೊಂದರೆಯಾಗಿರುತ್ತದೆ.

4. ಯೋಜನೆಯ ಯೋಜನಾ ವರದಿ ತಯಾರಿಸುವ ಕಾರ್ಯವನ್ನು ಮೆ: ಇನ್ಫಾಸ್ಟ್ರಕ್ಚರ್ ಇಂಜಿನಿಯರಿಂಗ್ ಸರ್ವೀಸಸ್ ಇವರಿಗೆ ವಹಿಸಲಾಗಿದ್ದು, ಸದರಿ ಸಲಹೆಗಾರರು ಕಾರ್ಯಸಾಧ್ಯತಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಕಾರ್ಯಸಾದ್ಯತಾ ವರದಿಯಂತೆ ಈಗಿನ ರಸ್ತೆಯ ಮೇಲಿನ ವಾಹನ ಸಾಂದ್ರತೆಯು 4984 ಪಿಸಿಯು ಇದ್ದು, 2030 ರಲ್ಲಿ ಕಲ್ಪನೆ ಮಾಡಿರುವ (Projected) ವಾಹನ ಸಾಂದ್ರತೆಯು 16068 ಪಿ.ಸಿ.ಯು ಆಗಿರುತ್ತದೆ.

5. ಈ ಯೋಜನೆಯಲ್ಲಿ ಹಾಲಿ ರಸ್ತೆಯನ್ನು 7.00 ಮೀ ಅಗಲದ ದ್ವಿಪಥ ರಸ್ತೆಯನ್ನಾಗಿ ಮತ್ತು ರಸ್ತೆಯ ಎರಡು ಬದಿಗೂ 2.50 ಅಗಲದ ಮಣ್ಣಿನ ಬದಿಗಳನ್ನು ಅಳವಡಿಸಲು ಯೋಜಿಸಿದೆ. ಅಲ್ಲದೆ, ಗ್ರಾಮ ಮತ್ತು ಪಟ್ಟಣ ಪ್ರದೇಶದಲ್ಲಿ 7.00 ಮೀ ಅಗಲದ ರಸ್ತೆ ಮತ್ತು ಎರಡು ಬದಿಗೂ 2.00 ಮೀ ಅಗಲದ ಪೇವಡ ಬದಿಯನ್ನು ಅಳವಡಿಸಲಾಗುವುದು. ಕುಂದಗೋಳ ಮತ್ತು ಲಕ್ಷ್ಮೇಶ್ವರ ಪಟ್ಟಣಗಳಲ್ಲಿ ಮೀಡಿಯನ್‌ನಿಂದ ವಿಭಜಿತ 4 ಪಥಗಳ ರಸ್ತೆಯನ್ನು ನಿರ್ಮಿಸಲು ಕೂಡಾ ಯೋಜಿಸಿದೆ. ಈ ರಸ್ತೆಯನ್ನು ಪೂರ್ತಿ ಮರುನಿರ್ಮಾಣ ಮಾಡಲಾಗುವುದು ಮತ್ತು ರಸ್ತೆಯ ನಿರ್ಮಾಣದಲ್ಲಿ ಕೆಳಕಂಡ ಅಂಶಗಳನ್ನು ಅಳವಡಿಸಲಾಗುವುದು.

| | |
|---|---|
| ಸಬ್ ಗ್ರೇಡ್ | –500 ಮಿ.ಮೀ |
| ಗ್ರಾನ್ಯುಲರ್ ಸಬ್ ಬೇಸ್ (ಜಿ.ಎಸ್.ಬಿ.) | –200 ಮಿ.ಮೀ. |
| ವೆಟ್ ಮಿಕ್ಸ್ ಮೆಕಡಂ | –250 ಮಿ.ಮೀ. |
| ಡೆನ್ಸ್ ಬಿಟುಮಿನ್ ಮೆಕಡಂ | –50 ಮಿ.ಮೀ. |
| ಸೆಮಿ ಡೆನ್ಸ್ ಬಿಟುಮೆನಸ್ ಕಾಂಕ್ರೀಟು | –25 ಮಿ.ಮೀ. |

6. ಇದಲ್ಲದೆ, 2 ಕಿರು ಸೇತುವೆಗಳು, 15 ಬಾಕ್ಸ್ ಕಲ್ವರ್ಟ್‌ಗಳು ಮತ್ತು 15 ಪೈಪ್ ಕಲ್ವರ್ಟ್‌ಗಳನ್ನು ಮರು ನಿರ್ಮಾಣ ಮಾಡಲಾಗುವುದು. ಕುಂದಗೋಳ ಸಂಶಿ ನಡುವೆ ಒಂದು ರೈಲ್ವೇ ಮೇಲ್ಸೇತುವೆಯ (ಆರ್.ಓ.ಬಿ.) ನಿರ್ಮಾಣವನ್ನು ಯೋಜಿಸಲಾಗಿದೆ. ಈ ಯೋಜನೆಯ ಅಂದಾಜು ಮೊತ್ತ 2008–09ನೇ ಸಾಲಿನ ರಾಷ್ಟ್ರೀಯ ಹೆದ್ದಾರಿ ಧಾರವಾಡ ವೃತ್ತದ ದರಪಟ್ಟಿಯ ಪ್ರಕಾರ ರೂ. 103,04,57,483 ಗಳಾಗಿದ್ದು, ಪ್ರತಿ ಕಿ.ಮೀ. ಅಭಿವೃದ್ಧಿಯ ವೆಚ್ಚವು ರೂ. 2,40,00,407.00 ಗಳಾಗಿರುತ್ತದೆ.

7. ಸದರಿ ಕಾಮಗಾರಿಯ ಕಾರ್ಯಸಾಧ್ಯತಾ ವರದಿಯನ್ನು ನಿಗಮದ ತಾಂತ್ರಿಕ ಸಮಿತಿಯು ದಿನಾಂಕ 10–09–2008 ರಲ್ಲಿ ನಡೆದ ಸಭೆಯಲ್ಲಿ ತಾತ್ವಿಕ ಒಪ್ಪಿಗೆಯನ್ನು ನೀಡಿರುತ್ತದೆ.

8. ಈ ರಸ್ತೆಯ ಅಭಿವೃದ್ಧಿ ಕಾಮಗಾರಿಯನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ನಿರ್ವಹಿಸಲು 2008–09ನೇ ಸಾಲಿನ ನಿಗಮದ ಕ್ರಿಯಾ ಯೋಜನೆಯಲ್ಲಿ ಸೇರಿಸಲಾಗಿತ್ತು.

9. ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಲೋಇ 52 ಇಎಪಿ 2008 ಬೆಂಗಳೂರು, ದಿನಾಂಕ 04ನೇ ಅಕ್ಟೋಬರ್ 2008**

1. ಧಾರವಾಡ ಜಿಲ್ಲೆಯ ಹುಬ್ಬಳ್ಳಿ ಮತ್ತು ಕುಂದಗೋಳ ತಾಲ್ಲೂಕುಗಳಲ್ಲಿನ, ಮಂಗಸೂಳಿ–ಲಕ್ಷ್ಮೇಶ್ವರ ರಾಜ್ಯ ಹೆದ್ದಾರಿ ಸಂಖ್ಯೆ.73ರ ರಸ್ತೆಯ ಭಾಗಗಳನ್ನು ಅಭಿವೃದ್ಧಿ ಹಾಗೂ ಅಗಲೀಕರಣಗೊಳಿಸಲು ರೂ. 103.50 ಕೋಟಿಗಳ (ನೂರ ಮೂರು ಕೋಟಿ ಹಾಗೂ ಐವತ್ತು ಲಕ್ಷ ರೂಪಾಯಿಗಳು) ಅಂದಾಜು ಮೊತ್ತಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. (ರಸ್ತೆಯ ಒಟ್ಟು ಉದ್ದ 43 ಕಿಮೀ.ಗಳು)

2. ಸದರಿ ಕಾಮಗಾರಿಯನ್ನು ಅನ್ಯೂಟಿ (annuity) ಆಧಾರದ ಮೇಲೆ ಅಭಿವೃದ್ಧಿಪಡಿಸುವ ಕುರಿತು ಪರಿಶೀಲಿಸುವ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ. ಲೋಇ/517 ಆಕೋ–1/ 2008 ದಿನಾಂಕ 22–09–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1390

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**PUBLIC WORKS, PORTS & IWT SECRETARIAT**

**Sub:** Implementation of Bangalore-Mysore Infrastructure Corridor Project (BMICP).

**Read:** Government Notification No.PWD 26 BMICP 2006 Dated 10-07-2006.

**PREAMBLE:**

A decision was taken by Government on 10-07-2006 regarding constituting a Judicial Inquiry into BMIC Project, and Mr.B.C.Patel, retired Chief Justice of High Court of Delhi, was appointed as a one man Commission of Inquiry. NICEL had challenged the constitution of this inquiry Commission in W.P.No.327 of 2006. The State Government had already submitted before the Hon'ble Supreme Court that it would not go ahead with this Commission of Inquiry. On 21-07-2008, Justice Patel has addressed a letter to the Hon'ble Minister for Law, Justice and Human Rights stating that he has been appointed in a National Commission and it will not be possible for him to continue hereafter as a Commission to inquire in the matter of Bangalore-Mysore Infrastructure Corridor Project. Therefore in view of non-availability of Justice B.C. Patel and that the implementation of the BMICP goes ahead, in public interest, the state government has decided to withdraw this notification and hence the following order.

**GOVERNMENT ORDER NO. 26 BMICP 2006 BANGALORE DATED 23rd October 2008**

1. Government withdraws the Notification No. PWD 26 BMICP 2006 Bangalore dated 10-07-2006, appointing Justice B.C.Patel as a Commission of Inquiry with immediate effect.

By order and in the name of the Governor of Karnataka,

P.R. 1509

**M. DEVIPRASAD**
Under Secretary to Government
Public Works, Ports & IWT Department (EAP)

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ**

**ವಿಷಯ:** ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿ–17ರ ಭಾಗವಾದ ಬೆಂಗಳೂರು–ಮದ್ದೂರು ನಾಲ್ಕು ಪಥದ ರಸ್ತೆಯನ್ನು ವರ್ಷಾಸನ ಆಧಾರದ ಮೇಲೆ (ಆನ್ಯೂಟಿ ಸ್ಕೀಮ್) ಕೈಗೊಂಡಿರುವ ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ ಲಿ.ರವರಿಗೆ 5ನೇ ಅರ್ಧ ವರ್ಷಾಸನವನ್ನು ಪಾವತಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ. ಲೋಇ/96/ಇಎಪಿ/2003 ದಿನಾಂಕ 15–11–2003.

2) ಕನ್ಸಿಷನ್ ಅಗ್ರಿಮೆಂಟ್ ದಿನಾಂಕ 22–01–2004.

3) ಸರ್ಕಾರದ ಸಮಸಂಖ್ಯೆ ಆದೇಶ ದಿನಾಂಕ 17–04–2007, 22–10–2007 ಮತ್ತು 19–04–2008.

4) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ. ಕೆಆರ್‌ಡಿಸಿಎಲ್/ವ್ಯ.ನಿ/2008–09/2268 ದಿನಾಂಕ 27–09–2008.

**ಪ್ರಸ್ತಾವನೆ:**

ಓದಲಾಗಿರುವ (1) ರಲ್ಲಿನ ಸರ್ಕಾರಿ ಆದೇಶದಲ್ಲಿ ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿ–17 ನ್ನು ನಾಲ್ಕು ಪಥದ ರಸ್ತೆಯನ್ನಾಗಿ ಪರಿವರ್ತಿಸುವಲ್ಲಿನ ಬೆಂಗಳೂರಿನಿಂದ ಮದ್ದೂರುವರೆಗೆ ಇರುವ ಮೊದಲನೇ ಪ್ಯಾಕೇಜ್ ಗುತ್ತಿಗೆಯನ್ನು ಮೆ:ಕೆ.ಎಂ.ಸಿ. ಕನ್‌ಸ್ಟ್ರಕ್ಷನ್ಸ್, ಮೆ:ನಾಗಾರ್ಜುನ ಕನ್‌ಸ್ಟ್ರಕ್ಷನ್ಸ್ ಲಿ. ಮತ್ತು ಮೆ:ಮೈಟಾಸ್ ಕನ್‌ಸ್ಟ್ರಕ್ಷನ್ಸ್ ಕಂಪನಿ (ಜೆ.ವಿ) ಇವರಿಗೆ ವಹಿಸಿದ್ದು, ಅರ್ಧವಾರ್ಷಿಕ ಪಾವತಿ ಮೊತ್ತವಾದ ರೂ.29.70 ಕೋಟಿ ಯೋಜನೆಯು ಮುಗಿದ ಮೇಲೆ ಎಂಟು ವರ್ಷಗಳು ಪಾವತಿ ಮಾಡಲು ಆದೇಶ ಹೊರಸಿಡಲಾಗಿತ್ತು.

ಓದಲಾದ (2) ರಲ್ಲಿನ ದಿನಾಂಕದಂದು ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ ಲಿಮಿಟೆಡ್ (ಕನ್ಸೆಷನ್ನೈರ್) ಹೆಸರಿನಲ್ಲಿ ಸ್ಪೆಷಲ್ ಪ್ರಾಜೆಕ್ಟ್ ವೆಹಿಕಲ್‌ನಂತೆ ಕನ್ಸೆಷನ್ ಅಗ್ರಿಮೆಂಟ್ ಮಾಡಿಕೊಳ್ಳಲಾಗಿದೆ.

ಓದಲಾದ (3) ರಲ್ಲಿನ ಸರ್ಕಾರಿ ಆದೇಶದಲ್ಲಿ ಮೊದಲನೇ ಅನ್ಯೂಟಿ ಮೊತ್ತವಾದ ರೂ. 29.70 ಕೋಟಿಗಳನ್ನು ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ ಲಿಮಿಟೆಡ್ ರವರಿಗೆ ಪಾವತಿಸಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮಕ್ಕೆ ಬಿಡುಗಡೆ ಮಾಡಿ ಆದೇಶ ಹೊರಡಿಸಲಾಗಿತ್ತು. ದಿನಾಂಕ 17–4–2007, 22–10–2007 ಹಾಗೂ 19–04–2008 ರಂದು ಹೊರಡಿಸಲಾಗಿರುವ ಸರ್ಕಾರಿ ಆದೇಶಗಳಲ್ಲಿ ಎರಡನೇ, ಮೂರನೇ ಮತ್ತು ನಾಲ್ಕನೇ ಅನ್ಯೂಟಿ ಮೊತ್ತವಾದ ರೂ. 29.70 ಕೋಟಿಗಳನ್ನು ಸದರಿ ಕಂಪನಿಗೆ ಪಾವತಿಸಲು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲಾಗಿದೆ.

ಓದಲಾದ (4) ರಲ್ಲಿನ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ದಿನಾಂಕ 27–09–2008ರ ಪತ್ರದಲ್ಲಿ ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿ ಲಿಮಿಟೆಡ್ ರವರಿಗೆ ಐದನೇ ಕಂತಿನ ಮೊತ್ತವಾದ ರೂ.29.70 ಕೋಟಿಗಳನ್ನು ದಿನಾಂಕ 21–10–2008 ರೊಳಗೆ ಪಾವತಿಸಬೇಕಾಗಿರುವುದರಿಂದ ರೂ.29.70 ಕೋಟಿ ಹಣವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದವರಿಗೆ ಬಿಡುಗಡೆ ಮಾಡುವಂತೆ ಕೋರಿರುವರು.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ. ಲೋಇ 22 ಇಎಪಿ 2008 ಬೆಂಗಳೂರು, ದಿನಾಂಕ 15ನೇ ಅಕ್ಟೋಬರ್ 2008**

ಬೆಂಗಳೂರು–ಮೈಸೂರು ರಾಜ್ಯ ಹೆದ್ದಾರಿಯ ಭಾಗವಾದ ಬೆಂಗಳೂರು–ಮದ್ದೂರನ್ನು ನಾಲ್ಕು ಪಥದ ರಸ್ತೆಯನ್ನಾಗಿ ಪರಿವರ್ತಿಸುವ ಕಾಮಗಾರಿಯನ್ನು ಕೈಗೊಂಡು ಮುಗಿಸಲಾದ ಮೆ:ಬೃಂದಾವನ್ ಇನ್‌ಫ್ರಾಸ್ಟ್ರಕ್ಚರ್ ಕಂಪನಿಗೆ ಪಾವತಿಸಬೇಕಾದ ಐದನೇ ಆನ್ಯೂಟಿ ಮೊತ್ತವಾದ (ಅರ್ಧ ವಾರ್ಷಿಕ ಪಾವತಿ) 29.70 ಕೋಟಿ ರೂಪಾಯಿಗಳನ್ನು (ಇಪ್ಪತ್ತೊಂಬತ್ತು ಕೋಟಿ ಎಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕೆ 5054–80–190–0–01–132–ಬಂಡವಾಳ (ಯೋಜನೆ) ಅಡಿಯಲ್ಲಿ, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲು ಆದೇಶ ಹೊರಡಿಸಲಾಗಿದೆ.

ಮುಂದುವರೆದು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ 29.70 ಕೋಟಿ ರೂಪಾಯಿಗಳ ಬಿಲ್ಲನ್ನು ಕೆ.ಎಫ್.ಸಿ.17ಎ (II)ಸಿ ರಲ್ಲಿನಂತೆ ಮಹಾಲೇಖಪಾಲರು (ಎ ಅಂಡ್ ಇ) ಇವರಿಂದ ಆಥರೈಸೇಷನ್ ಇಲ್ಲದೆಯೇ ಮನ್ನಣೆ ಮಾಡುವುದು ಹಾಗೂ ಸದರಿ ಬಿಲ್ಲಿನ ಮೊತ್ತಕ್ಕೆ ಸರ್ಕಾರದ ಅಧೀನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಎ) ಇವರ ಮೇಲು ರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀತಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಲೋಇ/539/ಆಕೋ.1/08 ದಿನಾಂಕ 14–10–2008 ರಲ್ಲಿನ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1478

**ಎಂ. ದೇವಿಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಹಾಗೂ
ಒಳನಾಡು ಜಲಸಾರಿಗೆ ಇಲಾಖೆ (ಇಎಪಿ)

**PUBLIC WORKS, PORTS & IWT SECRETARIAT**

**Sub:** Implementation of Bangalore-Mysore Infrastructure Corridor Project (BMICP).

**Read:**
1. Notification No.33/2007-08 dated 17-09-2007 issued by the Executive Engineer, Bangalore Division.
2. G.O.No.PWD 53 CRM 2007, Bangalore dated 30-04-2008.
3. G.O.No.PWD 53 CRN 2007, Bangalore dated 9-5-2008.

**PREAMBLE:**

1. The Bangalore-Mysore Infrastructure Corridor Project (BMICP) is being implemented by the Nandi Infrastructure Corridor Enterprises Limited.

2. Subsequently, the State Government on 30-08-2007 decided that Global tenders be called through Swiss Challenge Method in respect of the proposal given by the Global Infrastructure Consortium regarding BMICP subject to the outcome of the W.P.327/2007 pending before the Supreme Court of India and the Writ Petition pending before the Hon'ble High Court of Karnataka".

3. Based on the Government decision dated 30.8.2007 the Executive Engineer, Bangalore Division had issued an advertisement vide Notification No. 33/2007-08 dated 17.09.2007 calling for global tenders through Swiss Challenge method.

4. The said Notification No. 33/2007-08 dated 17.09.2007 was challenged by NICEL in Writ Petition No. 545 of 2007 before the Supreme Court of India. The Supreme Court on 27.09.2007 granted an interim order staying all further proceedings pursuant to that Notification. In addition, two contempt Petitions were filed before the Supreme Court, one by NICEL (Contempt petition No. 96 of 2007, NICEL & Ors. V. PB Mahishi & Ors) and another by one Dakshinamurthy (Contempt Petition No. 144 of 2006, Dakshinamurthy V. BK Das & Ors.) complaining various acts of commission and omission on the part of the State Government, which have obstructed implementation of the Project and alleging that the State had failed to give possession of the lands as per agreement and hence NICEL had been prevented from executing the Project.

5. The aforesaid two Writ Petitions No. 327/2006 and 545/2007, along with the two Contempt Petitions No. 144/2006 and 96 of 2007, came up before the Supreme Court on 25.03.2008 and after hearing, the Hon'ble Supreme Court directed that the two Writ Petitions to be posted for final disposal. As regards the two Contempt Petitions, the Supreme Court directed the issue of notices to respondents seeking reply within six weeks.

6. The then Advocate General had advised in his letter dated 27.3.2008 that there is no legal bar in favorably considering the various representations from the affected public who have pointed out the hardships faced by them in traveling through the peripheral road and the link road because of the fact that here and there the work is incomplete. The Advocate General had further opined that it is permissible in law to consider making available the lands required for the said purpose, so that the work on the peripheral road and the link road is completed and the public have smooth travel through these roads without any obstacle. This would also help in decongestion of traffic in and around the city of Bangalore.

7. The Government has examined the above proposal in detail and decided to go ahed with the implementation of the project in public interest and hence the following order:

**GOVERNMENT ORDER NO. PWD 53 CRM 2007 BANGALORE DT. 18th October 2008.**

a) Notification No.33/2007-08 dated 17-09-2007 inviting for global bids is withdrawn with immediate effect.

b) To proceed with the implementation of the Project, in terms of Frame Work Agreement, High Court direction in W.P.No.29221/1997 and the judgement of Hon'ble Supreme Court dated 20-04-2006.

c) In respect of Section A of the Project, to make lands available for completion of the incomplete portions of the Peripheral Road, Link Road and Expressway, so as to facilitate early completion of Section A of BMICP in public interest.

